

**ಕರ್ನಾಟಕ ವಿಧಾನ ಪರಿಷತ್ತು**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 883 |
| ಸದಸ್ಯರ ಹೆಸರು | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 21.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಕ್ರಮ ಮರಳುಗಾರಿಕೆಯನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು; | ರಾಜ್ಯದಲ್ಲಿ ಅಲ್ಲಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳು ನಡೆಯುತ್ತಿರುವುದು ಕಂಡುಬಂದಿದ್ದು, ಸದರಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿರುತ್ತದೆ.<br>• ಅನಧಿಕೃತ ಮರಳು ಗಣಿಗಾರಿಕೆ, ದಾಸ್ತಾನು, ಸಾಗಾಣಿಕೆಯನ್ನು ತಡೆಗಟ್ಟಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮರಳು ಸಮಿತಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮರಳು ಸಮಿತಿಯನ್ನು ರಚಿಸಲಾಗಿರುತ್ತದೆ.<br>• ಮೇಲ್ಕಂಡ ಸಮಿತಿಯಲ್ಲಿ ಕಂದಾಯ, ಪೊಲೀಸ್, ಅರಣ್ಯ, ಲೋಕೋಪಯೋಗಿ, ಜಿಲ್ಲಾ ಪಂಚಾಯತ್, ಗಣಿ ಮತ್ತು ಭೂವಿಜ್ಞಾನ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಸದಸ್ಯರುಗಳಾಗಿರುತ್ತಾರೆ.<br>• ಸದರಿ ಇಲಾಖೆಗಳ ಅಧಿಕಾರಿಗಳಿಗೆ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಯಲು ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 4(1), 4(1-A), 21 ಮತ್ತು 22 ರಡಿ ಹಾಗೂ ಕರ್ನಾಟಕ ಉಪ ಖನಿಜ (ತಿದ್ದುಪಡಿ) ರಿಯಾಯಿತಿ ನಿಯಮಗಳು, 1994ರ ನಿಯಮ 31-R ರಡಿ ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆ ದಾಖಲಿಸಲು ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ. |

. . . 2

| | | |
|---|---|---|
| | | • ಜಿಲ್ಲಾ ಮರಳು ಉಸ್ತುವಾರಿ ಸಮಿತಿಗಳಿಂದ ಆಯಾಕಟ್ಟಿನ ಪ್ರದೇಶಗಳಲ್ಲಿ ಮರಳು ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ. ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಮರಳು ಗಣಿಗಾರಿಕೆ/ ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ.<br>• ದಿನಾಂಕ 30.06.2020 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರ ನಿಯಮ 43 ಕ್ಕೆ ತಿದ್ದುಪಡಿ ತಂದಿದ್ದು, ಸದರಿ ತಿದ್ದುಪಡಿ ನಿಯಮದಲ್ಲಿ ಅನಧಿಕೃತ ಮರಳು ಹಾಗೂ ಇತರೆ ಉಪಖನಿಜಗಳ ಸಾಗಾಣಿಕೆಯಡಿಯಲ್ಲಿ ಹೆಚ್ಚಿನ ದಂಡದ ಮೊತ್ತವನ್ನು ವಿಧಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಮುಂದುವರೆದು, ಅನಧಿಕೃತ ಮರಳು / ಇತರೆ ಖನಿಜಗಳ ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಪ್ರತಿ ಜಿಲ್ಲೆಯಲ್ಲಿ ಖನಿಜ ಸಂರಕ್ಷಣಾ ಪಡೆ ಸ್ಥಾಪಿಸಲು ಸರ್ಕಾರದಿಂದ ಕ್ರಮ ವಹಿಸಲಾಗಿದೆ.<br>• ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಮರಳು ಗಣಿಗಾರಿಕೆ, ಸಾಗಾಣಿಕೆ ಮತ್ತು ದಾಸ್ತಾನಿನಡಿಯಲ್ಲಿ ಪತ್ತೆ ಹಚ್ಚಿದ ಪ್ರಕರಣಗಳು ಸಂಗ್ರಹಿಸಲಾದ ದಂಡದ ಮೊತ್ತ ಮತ್ತು ದಾಖಲಿಸಲಾದ ಮೊಕದ್ದಮೆಗಳ ವಿವರಗಳನ್ನು **ಅನುಬಂಧ–1** ರಲ್ಲಿ ನೀಡಲಾಗಿದೆ. |
| ಆ) | ಮರಳುಗಾರಿಕೆಯನ್ನು ನಡೆಸಲು ರಾಯಲ್ಟಿ ಪಡೆಯಲು ಅನುಸರಿಸಬೇಕಾದ ಮಾನದಂಡಗಳೇನು; ರಾಯಲ್ಟಿ ಪಡೆಯಲು ವಿಧಿಸುವ ಶುಲ್ಕ ಎಷ್ಟು; (ರಾಯಲ್ಟಿ ಅವಧಿಯ ಬಗ್ಗೆ ಮಾಹಿತಿ ನೀಡುವುದು) | ಹೊಸ ಮರಳು ನೀತಿ, 2020 ರನ್ವಯ, ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ಕ್ಕೆ ತಿದ್ದುಪಡಿ ತಂದು, (ತಿದ್ದುಪಡಿ) ನಿಯಮಗಳು, 2021 ನ್ನು ಜಾರಿಗೊಳಿಸಲಾಗಿರುತ್ತದೆ.<br>• ಸದರಿ ನಿಯಮಗಳಲ್ಲಿ I, II ಮತ್ತು III ನೇ ಶ್ರೇಣಿಯ ಹಳ್ಳ / ತೊರೆ ಮತ್ತು ಕೆರೆಗಳಲ್ಲಿ ಹಾಗೂ IV, V ಮತ್ತು VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಮತ್ತು ಅಣೆಕಟ್ಟು / ಜಲಾಶಯ / ಬ್ಯಾರೇಜ್‌ಗಳು ಮತ್ತು ಸದರಿ ಹಿನ್ನೀರಿನ ಪ್ರದೇಶಗಳಲ್ಲಿ ಹೂಳು ತೆಗೆಯುವ ಮುಖಾಂತರ ದೊರೆತ ಮರಳನ್ನು ಸರ್ಕಾರದಿಂದ ಅಧಿಸೂಚನೆ ಮೂಲಕ ನಿಗದಿಪಡಿಸಿದ ಸರ್ಕಾರಿ ಇಲಾಖೆ / ನಿಗಮ / ಮಂಡಳಿ / ಕಾರ್ಪೋರೇಷನ್ ಗಳಿಗೆ ಮರಳು ಗಣಿಗಾರಿಕೆ ನಡೆಸಿ, ಮರಳು ವಿಲೇವಾರಿ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ. |

| | | |
|---|---|---|
| | | • ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ, 2021ರ ನಿಯಮ 31-Z ರಲ್ಲಿ ಜಿಲ್ಲಾ ಮರಳು ಸಮಿತಿಯು ಸೂಕ್ತ ಸಮರ್ಥನೆಗಳೊಂದಿಗೆ ಪಟ್ಟಾ ಜಮೀನಿನಲ್ಲಿ ಪಟ್ಟಾದಾರರಿಗೆ ಅಥವಾ ಪಟ್ಟಾದಾರರಿಂದ ಒಪ್ಪಿಗೆ ಪತ್ರ ಪಡೆದವರಿಗೆ ಮರಳು ಗಣಿಗಾರಿಕೆಗೆ ಲೈಸನ್ಸ್ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>ಪಟ್ಟಾ ಜಮೀನಿನಲ್ಲಿ ಮರಳು ಗಣಿಗಾರಿಕೆಗೆ ಅನುಮತಿ ನೀಡಲು ಈ ಕೆಳಕಂಡ ಪ್ರಮುಖ ಮಾನದಂಡಗಳನ್ನು ನಿಗದಿಪಡಿಸಿದೆ:<br>• ಪಟ್ಟಾ ಜಮೀನಿನಲ್ಲಿ ಮರಳು ಗಣಿಗಾರಿಕೆಯನ್ನು ನೀಡುವ ಮುನ್ನ ನದಿ ದಂಡೆಯಿಂದ 50 ಮೀಟರ್ ಅಥವಾ ನದಿ ಪಾತ್ರದ ಅಗಲದ ಶೇ.10 ರಷ್ಟು ಅಥವಾ ಇವುಗಳಲ್ಲಿ ಯಾವುದರ ಅಂತರ ಹೆಚ್ಚಿದೆಯೋ ಆ ಅಂತರವನ್ನು ಸುರಕ್ಷಿತ ಅಂತರವಾಗಿ ಕಾಯ್ದುಕೊಳ್ಳಬೇಕಾಗುತ್ತದೆ.<br>• ಪಟ್ಟಾ ಜಮೀನಿನಲ್ಲಿ ಮರಳು ಗಣಿಗಾರಿಕೆಗೆ ಅಪೇಕ್ಷಿಸಿದ ಪ್ರದೇಶವು ಸಾರ್ವಜನಿಕ ರಚನೆಗಳಿಂದ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 6(2) ರಲ್ಲಿ ನಿರ್ದಿಷ್ಟ ಪಡಿಸಿರುವಂತೆ ಅಂತರವಿರಬೇಕು.<br>• ಅರ್ಜಿತ ಪಟ್ಟಾ ಜಮೀನಿನಲ್ಲಿ ದೊರೆಯುವ ಮರಳು ನಿರ್ಮಾಣ ಕಾಮಗಾರಿಗಳಿಗೆ ಬಳಸಲು ಯೋಗ್ಯವಿರುವ ಕುರಿತು ಲೋಕೋಪಯೋಗಿ ಇಲಾಖೆಯ ಗುಣನಿಯಂತ್ರಣ ಪ್ರಯೋಗ ಶಾಲೆ / NABL ಮಾನ್ಯತೆ ಪಡೆದಿರುವ ಪ್ರಯೋಗಶಾಲೆಗಳಿಂದ ಅಥವಾ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ಸಿವಿಲ್ ಇಂಜಿನಿಯರಿಂಗ್ ವಿಭಾಗಗಳ ಪ್ರಯೋಗ ಶಾಲೆಗಳಲ್ಲಿ ಪರೀಕ್ಷಿಸಿ ವಿಶ್ಲೇಷಣಾ ವರದಿ ಪಡೆಯಬೇಕಾಗಿರುತ್ತದೆ.<br>• ಅರ್ಜಿ ಸಲ್ಲಿಸಿದ ಪಟ್ಟಾ ಪ್ರದೇಶದ ಅಂತರ್ಜಲ ಸ್ಥಿತಿಗತಿ ಮತ್ತು ಮರಳು ಗಣಿಗಾರಿಕೆಯ ಪೂರ್ವ ಕಾರ್ಯಸಾಧ್ಯತೆ (Pre-Feasibility) ಬಗ್ಗೆ ಅಭಿಪ್ರಾಯ ವರದಿಯನ್ನು ಜಿಲ್ಲಾ ಅಂತರ್ಜಲ ನಿರ್ದೇಶನಾಲಯದ ಹಿರಿಯ ಭೂವಿಜ್ಞಾನಿಗಳಿಂದ ಪಡೆಯಬೇಕಾಗಿರುತ್ತದೆ. |

...4

| | | |
|---|---|---|
| | | • ಪಟ್ಟಾ ಜಮೀನನಲ್ಲಿ ಮರಳು ಗಣಿಗಾರಿಕೆಗೆ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರ ನಿಯಮ 8(5) ರಡಿ ನಿರ್ದಿಷ್ಟಪಡಿಸಿರುವಂತೆ ಸಂಬಂಧಪಟ್ಟ ಇಲಾಖೆಗಳಿಂದ ನಿರಾಕ್ಷೇಪಣಾ ಪತ್ರವನ್ನು ಪಡೆಯತಕ್ಕದ್ದು.<br>• ಪಟ್ಟಾ ಜಮೀನಿನಲ್ಲಿ ಮರಳು ಗಣಿಗಾರಿಕೆ ನಡೆಸಲು ಅನುಮೋದಿತ ಕ್ವಾರಿಯಿಂಗ್ ಪ್ಲಾನ್, ಪರಿಸರ ಅನುಮತಿ ಪತ್ರ, ಭೂಪರಿವರ್ತನೆ ಆದೇಶ ಪಡೆಯಬೇಕು.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2021ರ ನಿಯಮ 31-ZA ರಲ್ಲಿ ಕರಾವಳಿ ಜಿಲ್ಲೆಗಳ ಕರಾವಳಿ ನಿಯತ್ರಣ ವಲಯ (CRZ) ವ್ಯಾಪ್ತಿಯ ನದಿ ಪಾತ್ರಗಳಲ್ಲಿ ಮರಳು ದಿಬ್ಬಗಳನ್ನು ತೆರವುಗೊಳಿಸಲು ಕೇಂದ್ರ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದ ಆದೇಶದಂತೆ ಕರಾವಳಿ ಜಿಲ್ಲೆಗಳ ಸಾಂಪ್ರದಾಯಿಕ ಮರಳು ತೆಗೆಯುವ ವ್ಯಕ್ತಿಗಳಿಗೆ 01 ವರ್ಷದ ಅವಧಿಗೆ ತಾತ್ಕಾಲಿಕ ಪರವಾನಿಗೆಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಸಾಂಪ್ರದಾಯಿಕ ಮರಳು ತೆಗೆಯುವ ವ್ಯಕ್ತಿಗಳನ್ನು ಆಯ್ಕೆ ಮಾಡುವ ಕುರಿತು ಮಾರ್ಗಸೂಚಿಗಳನ್ನು ಹೊರಡಿಸಲು ಕ್ರಮ ವಹಿಸಲಾಗಿದೆ.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2021ರ ನಿಯಮ 31-ZB ರಲ್ಲಿ ಕರಾವಳಿ ಜಿಲ್ಲೆಗಳ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ (Non CRZ) ಪ್ರದೇಶಗಳ ವ್ಯಾಪ್ತಿಯ IV, V ಮತ್ತು VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಗುರುತಿಸಿರುವ ಮರಳು ಬ್ಲಾಕ್ ಗಳನ್ನು ಜಿಲ್ಲೆಯ ಸಾಂಪ್ರದಾಯಿಕ ಮರಳು ತೆಗೆಯುವ ವ್ಯಕ್ತಿಗಳಿಗೆ ಟೆಂಡರ್ ಕಂ ಹರಾಜು ಮೂಲಕ ವಿಲೇವಾರಿ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಟೆಂಡರ್ ಕಂ ಹರಾಜು ಮೂಲಕ ಮರಳು ಬ್ಲಾಕ್ ಗಳನ್ನು ವಿಲೇವಾರಿ ಮಾಡುವ ಸಂಬಂಧ ಮಾರ್ಗಸೂಚಿಗಳನ್ನು ಮತ್ತು ಟೆಂಡರ್ ದಸ್ತಾವೇಜನ್ನು ಹೊರಡಿಸಬೇಕಾಗಿರುತ್ತದೆ. |

| | | |
|---|---|---|
| | | • ಪಟ್ಟಾ ಜಮೀನಿನ ಲೈಸೆನ್ಸ್ ದಾರರಿಂದ ಮತ್ತು ಕರಾವಳಿ ಜಿಲ್ಲೆಗಳ ತಾತ್ಕಾಲಿಕ ಪರವಾನಿಗೆದಾರರಿಂದ ಪ್ರತಿ ಮೆಟ್ರಿಕ್ ಟನ್ ಮರಳಿಗೆ ರಾಜಧನ, ರಾಜಧನದ ಶೇಕಡ 50 ರಷ್ಟು ಹೆಚ್ಚುವರಿ ನಿಯತಕಾಲಿಕ ಮೊತ್ತ ಮತ್ತು ರಾಜಧನದ ಶೇಕಡ 20 ರಷ್ಟು ಜಿಲ್ಲಾ ಖನಿಜ ಪ್ರತಿಷ್ಠಾನ ಮೊತ್ತವನ್ನು ಪಾವತಿಸಿಕೊಂಡು ರವಾನೆ ಪರವಾನಿಗೆಗಳನ್ನು ನೀಡಲಾಗಿರುತ್ತದೆ.<br>• ಹರಾಜು ಮೂಲಕ ಗುತ್ತಿಗೆ ಪಡೆದ ಗುತ್ತಿಗೆದಾರರಿಂದ ಪ್ರತಿ ಮೆಟ್ರಿಕ್ ಟನ್ ಮರಳಿಗೆ ರಾಜಧನ, ಹೆಚ್ಚುವರಿ ನಿಯತಕಾಲಿಕ ಮೊತ್ತ (ಬಿಡ್ ಮೊತ್ತ) ಮತ್ತು ರಾಜಧನದ ಶೇಕಡ 20 ರಷ್ಟು ಜಿಲ್ಲಾ ಖನಿಜ ಪ್ರತಿಷ್ಠಾನ ಮೊತ್ತವನ್ನು ಪಾವತಿಸಿಕೊಳ್ಳಲಾಗುವುದು.<br>• ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 1994 ರ ನಿಯಮ 36(1) ರನ್ವಯ ಷೆಡ್ಯೂಲ್-II ರಲ್ಲಿ ನಿಗದಿಪಡಿಸಿರುವಂತೆ ಪ್ರತಿ ಟನ್ ಮರಳಿಗೆ ರೂ.80/- ರಾಜಧನವನ್ನು ಪಾವತಿಸಬೇಕಾಗಿರುತ್ತದೆ.<br>• ಟೆಂಡರ್ ಕಂ ಇ-ಹರಾಜು ಮೂಲಕ ಗುತ್ತಿಗೆ ಪಡೆದ ಗುತ್ತಿಗೆದಾರರುಗಳಿಗೆ ಹಾಗೂ ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆಗೆ ಲೈಸನ್ಸ್ ಪಡೆದ ಲೈಸನ್ಸ್ ದಾರರುಗಳಿಗೆ ನಿಯಮಾನುಸಾರ 05 ವರ್ಷಗಳ ಅವಧಿಗೆ ಗುತ್ತಿಗೆ ಮಂಜೂರು ಮಾಡಲಾಗಿರುತ್ತದೆ.<br>• ಕರಾವಳಿ ನಿಯಂತ್ರಣ ವಲಯ ಪ್ರದೇಶಗಳ ವ್ಯಾಪ್ತಿಯಲ್ಲಿ ಮರಳು ದಿಬ್ಬಗಳನ್ನು ತೆರವುಗೊಳಿಸಲು ನಿಯಮಾನುಸಾರ 01 ವರ್ಷದ ಅವಧಿಗೆ ತಾತ್ಕಾಲಿಕ ಪರವಾನಿಗೆಗಳನ್ನು ನೀಡಲಾಗುತ್ತದೆ. |
| ಇ) | ಕಳೆದ ಜನವರಿಯಿಂದ ನವೆಂಬರ್‌ವರೆಗೆ ರಾಯಲ್ಟಿ ಪಡೆಯದೆ ರಾಜಸ್ವಕ್ಕೆ ನಷ್ಟವುಂಟು ಮಾಡುತ್ತಾ ಅಕ್ರಮ ಮರಳುಗಾರಿಕೆಯನ್ನು ನಡೆಸಿರುವ ಎಷ್ಟು ಪ್ರಕರಣಗಳು ರಾಜ್ಯದಲ್ಲಿ ದಾಖಲಾಗಿವೆ.; (ಜಿಲ್ಲಾವಾರು ಮಾಹಿತಿ ನೀಡುವುದು) | ಜನವರಿ-2021 ರಿಂದ ನವೆಂಬರ್-2021 ರ ಅಂತ್ಯದವರೆಗೆ ಸರ್ಕಾರಕ್ಕೆ ರಾಜಧನ ಪಾವತಿಸದೇ ಅನಧಿಕೃತ ಮರಳು ಗಣಿಗಾರಿಕೆ ಸಾಗಾಣಿಕೆ ಮತ್ತು ಸಂಗ್ರಹಣೆಯಡಿಯಲ್ಲಿ ದಾಖಲಿಸಲಾದ ಜಿಲ್ಲಾವಾರು ಪ್ರಕರಣಗಳ ವಿವರಗಳು ಈ ಕೆಳಕಂಡಂತಿರುತ್ತವೆ. |

...6

| ಕ್ರ. ಸಂ | ಜಿಲ್ಲೆ | ಅನಧಿಕೃತ ಮರಳು ಗಣಿಗಾರಿಕೆ | ಅನಧಿಕೃತ ಮರಳು ಸಾಗಾಣಿಕೆ | ಅನಧಿಕೃತ ಮರಳು ದಾಸ್ತಾನು | ಅನಧಿಕೃತ ಫಿಲ್ಟರ್ ಮರಳು | [illegible] |
|---|---|---|---|---|---|---|
| 1 | ಬೆಂಗಳೂರು ಗ್ರಾಮಾಂತರ | | | | | |
| 2 | ಬೆಂಗಳೂರು ನಗರ | 0 | 0 | 0 | 0 | 0 |
| 3 | ತುಮಕೂರು | 0 | 0 | 0 | 2 | 2 |
| 4 | ಕೋಲಾರ | 0 | 0 | 0 | 0 | 0 |
| 5 | ಚಿಕ್ಕಬಳ್ಳಾಪುರ | 0 | 1 | 0 | 1 | 2 |
| 6 | ರಾಮನಗರ | 0 | 0 | 0 | 0 | 0 |
| 7 | ದಾವಣಗೆರೆ | 1 | 1 | 0 | 6 | 8 |
| 8 | ಚಿತ್ರದುರ್ಗ | 0 | 0 | 0 | 0 | 0 |
| 9 | ಶಿವಮೊಗ್ಗ | 0 | 2 | 0 | 0 | 2 |
| 10 | ಮೈಸೂರು | 0 | 0 | 1 | 0 | 1 |
| 11 | ಮಂಡ್ಯ | 0 | 0 | 0 | 0 | 0 |
| 12 | ಚಾಮರಾಜನಗರ | 0 | 0 | 0 | 0 | 0 |
| 13 | ಹಾಸನ | 0 | 0 | 0 | 0 | 0 |
| 14 | ದಕ್ಷಿಣ ಕನ್ನಡ | 0 | 20 | 0 | 0 | 20 |
| 15 | ಉಡುಪಿ | 1 | 0 | 0 | 0 | 1 |
| 16 | ಕೊಡಗು | 4 | 2 | 0 | 0 | 6 |
| 17 | ಚಿಕ್ಕಮಗಳೂರು | 2 | 2 | 0 | 0 | 4 |
| 18 | ಕಲಬುರಗಿ | 19 | 33 | 19 | 0 | 71 |
| 19 | ರಾಯಚೂರು | 2 | 69 | 12 | 0 | 83 |
| 20 | ಬೀದರ್ | 0 | 41 | 10 | 0 | 51 |
| 21 | ಬಳ್ಳಾರಿ | 0 | 0 | 0 | 0 | 0 |
| 22 | ಹೊಸಪೇಟೆ | 0 | 9 | 0 | 0 | 9 |
| 23 | ಯಾದಗಿರಿ | 0 | 79 | 0 | 0 | 79 |
| 24 | ಕೊಪ್ಪಳ | 1 | 51 | 4 | 0 | 56 |
| 25 | ಬೆಳಗಾಂ | 22 | 3 | 19 | 2 | 46 |
| 26 | ವಿಜಯಪುರ | 5 | 10 | 0 | 0 | 15 |
| 27 | ಧಾರವಾಡ | 0 | 0 | 3 | 0 | 3 |
| 28 | ಗದಗ | 0 | 0 | 0 | 0 | 0 |
| 29 | ಹಾವೇರಿ | 1 | 1 | 4 | 0 | 6 |
| 30 | ಬಾಗಲಕೋಟೆ | 0 | 59 | 27 | 0 | 86 |
| 31 | ಉತ್ತರ ಕನ್ನಡ | 15 | 2 | 0 | 0 | 17 |
| | | 0 | 13 | 0 | 0 | 13 |
| | ಒಟ್ಟು | 73 | 398 | 99 | 11 | 581 |

| | | |
|---|---|---|
| ಈ) | ಪ್ರತಿ ವರ್ಷ ಮರಳುಗಾರಿಕೆಯಿಂದ ರಾಜ್ಯಕ್ಕೆ ಸಂಗ್ರಹವಾಗುವ ರಾಜಧನ ಎಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು) | 2018-19 ನೇ ಸಾಲಿನಿಂದ 2020-21 ನೇ ಸಾಲಿನ ವರೆಗೆ ಮರಳು ಗಣಿಗಾರಿಕೆಯಿಂದ ಜಿಲ್ಲಾವಾರು ಸಂಗ್ರಹವಾದ ರಾಜಧನ, ಹೆಚ್ಚುವರಿ ನಿಯತಕಾಲಿಕ ಮೊತ್ತ (APP) ಮತ್ತು ಸರಾಸರಿ ಹೆಚ್ಚುವರಿ ನಿಯತಕಾಲಿಕ(AAPP) ಮೊತ್ತದ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |

ಸಂಖ್ಯೆ ಸಿಐ 647 ಎಂಎಂಎನ್ 2021

Halappa

**(ಆಚಾರ್ ಹಾಲಪ್ಪ ಬಸಪ್ಪ)**

ಗಣಿ ಮತ್ತು ಭೂವಿಜ್ಞಾನ ಹಾಗೂ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು

ವಿಕಲಚೇತನರ, ಹಿರಿಯ ನಾಗರಿಕರ

ಸಬಲೀಕರಣ ಸಚಿವರು.

**ಅನುಬಂಧ-1**

## ಕಳೆದ 3 ವರ್ಷಗಳಲ್ಲಿ ಅನಧಿಕೃತ ಮರಳು ಚಟುವಟಿಕೆ ವಿರುದ್ದ ವಿಧಿಸಿದ ದಂಡ ಮತ್ತು ದಾಖಲಿಸಿರುವ ಮೊಕದ್ದಮೆಗಳ ವಿವರ

**2018-19**

| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
|---|---|---|---|---|
| 1 | ಅನಧಿಕೃತ ಮರಳು ಗಣಿಗಾರಿಕೆ | 191 | 54.62 | 106 |
| 2 | ಅನಧಿಕೃತ ಮರಳು ಸಾಗಾಣಿಕೆ | 3361 | 375.57 | 2584 |
| 3 | ಅನಧಿಕೃತ ಮರಳು ದಾಸ್ತಾನು | 284 | 479.29 | 176 |
| 4 | ಫಿಲ್ಟರ್ ಮರಳು | 33 | 0.90 | 27 |
| | ಒಟ್ಟು | **3869** | **910.38** | **2893** |

**2019-20**

| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
|---|---|---|---|---|
| 1 | ಅನಧಿಕೃತ ಮರಳು ಗಣಿಗಾರಿಕೆ | 240 | 128.81 | 106 |
| 2 | ಅನಧಿಕೃತ ಮರಳು ಸಾಗಾಣಿಕೆ | 2676 | 271.01 | 1866 |
| 3 | ಅನಧಿಕೃತ ಮರಳು ದಾಸ್ತಾನು | 271 | 52.75 | 113 |
| 4 | ಫಿಲ್ಟರ್ ಮರಳು | 6 | 0.00 | 5 |
| | ಒಟ್ಟು | **3193** | **452.57** | **2090** |

**2020-21**

| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
|---|---|---|---|---|
| 1 | ಅನಧಿಕೃತ ಮರಳು ಗಣಿಗಾರಿಕೆ | 293 | 82.55 | 72 |
| 2 | ಅನಧಿಕೃತ ಮರಳು ಸಾಗಾಣಿಕೆ | 2866 | 506.41 | 929 |
| 3 | ಅನಧಿಕೃತ ಮರಳು ದಾಸ್ತಾನು | 287 | 135.85 | 127 |
| 4 | ಫಿಲ್ಟರ್ ಮರಳು | 5 | 0.00 | 5 |
| | ಒಟ್ಟು | **3451** | **724.81** | **1133** |

**2021-22 (ಏಪ್ರಿಲ್ 2021 ರಿಂದ ನವೆಂಬರ್ 2021 ರ ಅಂತ್ಯದವರೆಗೆ)**

| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
|---|---|---|---|---|
| 1 | ಅನಧಿಕೃತ ಮರಳು ಗಣಿಗಾರಿಕೆ | 112 | 33.87 | 62 |
| 2 | ಅನಧಿಕೃತ ಮರಳು ಸಾಗಾಣಿಕೆ | 2278 | 484.12 | 373 |
| 3 | ಅನಧಿಕೃತ ಮರಳು ದಾಸ್ತಾನು | 187 | 135.28 | 98 |
| 4 | ಫಿಲ್ಟರ್ ಮರಳು | 11 | 0.30 | 11 |
| | ಒಟ್ಟು | **2588** | **653.57** | **544** |

WSLUP-2

## Statement of Royalty, AAPP & DMF Amount Collected from Sand Mining in the State during the year 2020-21 (April-20 to March-2021)

| Sl. No. | Districts | Abstract | | | | Total |
|---|---|---|---|---|---|---|
| | | Production (in MT) | Royalty | APP / AAPP | DMF | |
| | | | (Rs. in lakhs) | | | |
| 1 | 2 | 3 | 4 | 5 | 6 | 7 |
| 1 | Davangere | 74542.00 | 51.90 | 542.25 | 5.19 | 599.34 |
| 2 | Chithradurga | 437015.00 | 315.71 | 1076.04 | 31.57 | 1423.32 |
| 3 | Shivamogga | 124177.00 | 82.09 | 867.50 | 8.21 | 957.80 |
| 4 | Mandya | 907.00 | 0.69 | 0.35 | 0.07 | 1.11 |
| 5 | Chamarajnagar | 4545.00 | 2.73 | 27.61 | 0.27 | 30.61 |
| 6 | Hassan | 130558.00 | 90.39 | 786.25 | 9.04 | 885.68 |
| 7 | Dakshin kannada | 364800.00 | 279.03 | 370.52 | 27.91 | 677.46 |
| 8 | Udupi | 507094.00 | 404.80 | 224.53 | 40.47 | 669.80 |
| 9 | Kodagu | 5810.00 | 3.94 | 36.70 | 0.39 | 41.03 |
| 10 | Chikkamagaluru | 51459.00 | 38.17 | 475.30 | 3.82 | 517.29 |
| 11 | Kalburgi | 101801.00 | 76.08 | 178.21 | 7.60 | 261.89 |
| 12 | Raichur | 324073.00 | 233.78 | 2267.01 | 23.38 | 2524.17 |
| 13 | Bellary (Hospete) | 226101.00 | 167.88 | 1374.03 | 16.78 | 1558.69 |
| 14 | Bidar | 146.00 | 0.12 | 0.06 | 0.00 | 0.18 |
| 15 | Yadgir | 57177.00 | 45.74 | 461.99 | 4.57 | 512.30 |
| 16 | Koppal | 130751.00 | 93.56 | 125.76 | 9.12 | 228.44 |
| 17 | Belgaum | 48227.00 | 33.04 | 72.45 | 3.31 | 108.80 |
| 18 | Vijayapur | 1335.00 | 1.07 | 0.51 | 0.10 | 1.68 |
| 19 | Gadag | 353962.00 | 257.79 | 721.48 | 25.78 | 1005.05 |
| 20 | Haveri | 108502.00 | 79.35 | 780.16 | 7.94 | 867.45 |
| 21 | Bagalkote | 844853.00 | 626.54 | 331.04 | 62.66 | 1020.24 |
| 22 | Uttara Kannada | 342325.00 | 269.16 | 134.38 | 26.92 | 430.46 |
| | **Total** | 4240160.00 | 3153.56 | 10854.13 | 315.10 | 14322.79 |

CI 647 MMN 2021